RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಅಕ್ಟೋಬರ್ ೨೪, ೨೦೧೩ (ಕಾರ್ತೀಕ ೨, ಶಕ ವರ್ಷ ೧೯೩೫)<br>**Bangalore, Thursday, October 24, 2013 (Karthika 2, Shaka Varsha 1935)** | ಸಂಚಿಕೆ ೪೨<br>**Issue 42** |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ : ಕಾಅಕಾ/ಡಬ್ಲ್ಯೂಸಿಎಫ್–13/2013, ದಿನಾಂಕ : 03–07–2013.**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| ಶ್ರೀಮತಿ ಶೈನಾಜ್ ಶ. ಶೇಖ್ ಹಾಗೂ ಇತರರು ಸಾಕೀನ ಎಲ್ಲರೂ ಸಾ// ಕಡವಾಡ, ಪೋಸ್ಟ್– ಸುಂಕೇರಿ ತಾ. ಕಾರವಾರ | **ವಿರುದ್ಧ** | ಅಧೀಕ್ಷಕರು ಅಭಿಯಂತರು (ವಿದ್ಯುತ್) ನಾಗಝರಿ, ಅಂಬಿಕಾನಗರ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಪರವಾಗಿ. |

**ಪ್ರಕಟಣೆ**

ಶ್ರೀ ಶರ್ಫುದ್ದೀನ್ ಅಲ್ಲಿ ಶೇಖ್, ಆಪರೇಟಿವ (ವ)/ಎಸ್ಇಇ(ಎನ್) ಇವರು ದಿನಾಂಕ : 08–06–2013 ರಂದು ನಾಗಝರಿ ವಿದ್ಯುತ್‌ದಾಗಾರದ 1ನೇ ಪಾಳೆಯ ಕೆಲಸಕ್ಕೆ ನಿಗಮದ ಸಿಬ್ಬಂದಿಗಳ ಕರೆದೊಯ್ಯುವ ವಾಹನ (ಕೆ.ಎ–31/6927) ದಾರಿಯ ಮಧ್ಯದಲ್ಲಿ ಅಪಘಾತ ಸಂಭವಿಸಿ ನಿಧನರಾಗಿದ್ದರ ಪ್ರಯುಕ್ತ ಪ್ರತಿವಾದಿಗಳಾದ ಅಧೀಕ್ಷಕರು ಅಭಿಯಂತರು (ವಿದ್ಯುತ್) ನಾಗಝರಿ, ಅಂಬಿಕಾನಗರ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಪರವಾಗಿ ದಿನಾಂಕ: 01–07–2013 ರಂದು ಮೃತನ ಅವಲಂಬಿತರ ಕುಟುಂಬದ ಹೆಸರೊಂದಿಗೆ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಯಡಿಯಲ್ಲಿ ರೂ. 5,42,240/– (ಐದು ಲಕ್ಷದ ನಲ್ವತ್ತೆರಡು ಸಾವಿರದ ಎರಡು ನೂರ ನಲ್ವತ್ತು ರೂಪಾಯಿಗಳು ಮಾತ್ರ) ಗಳ ಪರಿಹಾರವನ್ನು ಈ ನ್ಯಾಯಾಲಯದಲ್ಲಿ ಠೇವಣಿಗೊಳಿಸಿರುತ್ತಾರೆ.

ಈ ಸಂಬಂಧ, ಸಂಬಂಧಪಟ್ಟವರಿಗೆ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆಯ ಮೂಲಕ ತಿಳಿಯಪಡಿಸುವುದೇನೆಂದರೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ. ಇಲ್ಲವೆ ಬೇರೆ ಶಾಸನಬದ್ಧ ವಾರಸುದಾರರೆಂದು ಪರಿಗಣಿಸಬೇಕೆಂದು ಇಚ್ಚಿಸಿದ್ದಲ್ಲಿ, ಅಂಥವರು ಈ ಪ್ರಕಟಣೆಯು ಪ್ರಕಟವಾದ 30 ದಿನಗಳೊಳಗಾಗಿ ಆಕ್ಷೇಪಣೆಯನ್ನಾಗಲಿ ಅಥವಾ ಅರ್ಜಿಯನ್ನಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಹೆಚ್.ಎಂ. ನಾಗರಾಜ್**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಧನ ಆಯುಕ್ತರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ

**P.R. 2166**

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪ ವಿಭಾಗ–1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು ಇವರ ನ್ಯಾಯಾಲಯ

**ಸಂಖ್ಯೆ : ಡಬ್ಲ್ಯೂಸಿಎ/ಸಿಆರ್–13/2013 ಎಫ್, ದಿನಾಂಕ : 31–07–2013.**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1. ಶ್ರೀಮತಿ ವಿಮಲ<br>2. ವೈಷ್ಣವಿ<br>3. ವರ್ಷಿತ<br>ಡೋರ್ ನಂ. 7–60/1, ಕಲಾಯಿ ಕಂಡೇವು ಅಳಪೆ ಗ್ರಾಮ ಸರಿಪಲ್ಲ, ಮಂಗಳೂರು ತಾಲ್ಲೂಕು. | **ವಿರುದ್ಧ** | 1. ಶ್ರೀ ಸುಕೇಶ್ ಕುಮಾರ್ ಬಿನ್. ಭಾಸ್ಕರ ಅಮೀನ್ ಡೋರ್ ನಂ. 1–33–2002/3, ಸುಧೀರ್ ನಿವಾಸ್, ಅಶೋಕ ನಗರ ಉರ್ವ, ಮಂಗಳೂರು.<br>2. ರಿಲಯನ್ಸ್ ಜನರಲ್ ಇನ್ಸುರೆನ್ಸ್ ಕಂ.ಲಿ., ಮ್ಯಾಕ್ಸಿಮಮ್ ಕಮರ್ಷಿಯಲ್ ಕಾಂಪ್ಲೆಕ್ಸ್ ಲೈಟ್ ಹೌಸ್ ಹಿಲ್ ರೋಡ್, ಹಂಪನಕಟ್ಟ, ಮಂಗಳೂರು |

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ವಿಮಲ ಇವರು ತಮ್ಮ ಗಂಡನಾದ ದಿವಂಗತ ಶ್ರೀ ನಂದೀಶ್ (ಡ್ರೈವರ್) ರವರು ಪ್ರತಿವಾದಿಯವರಾದ ಶ್ರೀ ಸುಕೇಶ್ ಕುಮಾರ್‌ರವರಲ್ಲಿ ಡ್ರೈವರ್ ಆಗಿ ಕೆಲಸದಲ್ಲಿ ನಿರತರಾಗಿದ್ದ ದಿನಾಂಕ : 30–03–2013 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದರೆ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಮಹೇಶ್**

P.R. 2171

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ–1, ಮಂಗಳೂರು.

## KARNATAKA STATE BAR COUNCIL, OLD K.G.I.D. BLDG., BANGALORE

### NOTIFICATION

### NO. 9/2013, DATED : 11-9-2013,

As per Rule 8 & 12 of "The Karnataka State Bar Council (election of Chaiman & Vice Chairman) Rules, 1978", it is declared that the following Members of the Bar Council have been elected unopposed to the Office of the Chairman & Vice Chairman.

**CHAIRMAN**

| Sl. No. | Name of the Candidate | Address |
|---|---|---|
| 1. | GOPALASWAMY C.R. | Advocate, No. 1431, 'THEERTHA ROOPA' 1st Stage, II Phase, 2nd Cross, Chandra Layout, Bangalore-40<br>Ph. : off : 23467414<br>Res : 23394928<br>Mbl : 9845117411 |

**VICE CHAIRMAN**

| Sl. No. | Name of the Candidate | Address |
|---|---|---|
| 1. | RAVINDRANATH RAI B.B. | Advocate,<br>LAKSHMI NIVAS, 3rd Cross, Kodialguthu, East, Kodialbail Post, Mangalore-575003<br>Ph. : Off 2497199<br>Res : 2496442<br>Mbl : 9845577997<br>STD : 0824 |

**R.V. SREERAMA REDDY**

PD-114
SC-50

Returning Officer,
Karnataka State Bar Council, Bangalore

## ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು

**ವಿಷಯ:** ಶ್ರೀ ಎಂ. ರಾಜಶೇಖರ್, ಡಿ–ಗ್ರೂಪ್ ನೌಕರರು, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಬಳ್ಳಾರಿ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಶಿಸ್ತುಕ್ರಮ.

**ಓದಲಾಗಿದೆ:**

1) ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಇವರ ಪತ್ರ ಸಂಖ್ಯೆ : ಜಕೃನಿಬ/ಸಿ/ಅಧೀ/ವಿಚಾರಣೆ/ಎಂಆರ್/2011-12, ದಿನಾಂಕ : 16-6-2011 ಹಾಗೂ 25-2-2011.
2) ಇಲಾಖಾ ದೋಷಾರೋಪಣೆ ಪಟ್ಟಿ ಜಾರಿ ದಿನಾಂಕ : 8–11–2011.
3) ಇಲಾಖಾ ಆದೇಶ ಸಂಖ್ಯೆ : ಸಿಬ್ಬಂದಿ–1/ವಿಚಾರಣೆ–5/10/2010–11, ದಿನಾಂಕ : 16–4–2012.
4) ಶ್ರೀಮತಿ ಶೀಲಾ ಸರ್‌ದೇಸಾಯಿ, ಅಧೀಕ್ಷಕರು ಹಾಗೂ ಮಂಡನಾಧಿಕಾರಿ ಇವರ ಮನವಿ ದಿನಾಂಕ : 30–4–2012.
5) ಇಲಾಖಾ ಆದೇಶ ಸಂಖ್ಯೆ : ಸಿಬ್ಬಂದಿ–1/ವಿಚಾರಣೆ–5/10/2010–11, ದಿನಾಂಕ : 11–6–2012.
6) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ : 14–3–2013.
7) ಇಲಾಖಾ 2ನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ : ಸಿಬ್ಬಂದಿ–1/ವಿಚಾರಣೆ–5/10/2010–11, ದಿನಾಂಕ : 15–4–2013.
8) ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಇವರ ಪತ್ರ ಸಂಖ್ಯೆ : ಜಕೃನಿಬ/ಸಿ/ಅಧೀ/ವಿಚಾರಣೆ/ ಎಂರಾ.ಗ್ರೂಪ್–ಡಿ/2010–11, ದಿನಾಂಕ : 12–5–2013.
9) ಇಲಾಖಾ ಪತ್ರ ಸಂಖ್ಯೆ : ಸಿಬ್ಬಂದಿ–1/ವಿಚಾರಣೆ–5/10/2010–11, ದಿನಾಂಕ : 7–6–2013.
10) ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಇವರ ಪತ್ರ ಸಂಖ್ಯೆ : ಜಕೃನಿಬ/ಸಿ/ಅಧೀ/ವಿಚಾರಣೆ/ಎಂರಾ.ಗ್ರೂಪ್–ಡಿ/2010–11, ದಿನಾಂಕ : 17–6–2013 ಮತ್ತು 10–7–2013.

**ಪ್ರಸ್ತಾವನೆ:**

ಶ್ರೀ ಎಂ. ರಾಜಶೇಖರ್, ಡಿ–ಗ್ರೂಪ್ ನೌಕರರು, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಬಳ್ಳಾರಿ ಜಿಲ್ಲೆ ಇವರು ಕಛೇರಿ ಕರ್ತವ್ಯಕ್ಕೆ ದಿನಾಂಕ : 3–8–2010 ರಿಂದ 7–8–2010 ರವರೆವಿಗೆ 5 ದಿನಗಳ ಪರಿವರ್ತಿತ ರಜೆಗೆ ಅರ್ಜಿ ಸಲ್ಲಿಸಿದ್ದು, ದಿನಾಂಕ : 8–8–2010 ರಿಂದ ಇಂದಿನವರೆಗೂ (ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಇವರು ಇಲಾಖೆಗೆ ಪ್ರಸ್ತಾವನೆ ಸಲ್ಲಿಸುವವರೆಗೆ) ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಯಾವುದೇ ರಜೆ ಅರ್ಜಿ ಸಲ್ಲಿಸದೇ ಕೆಲಸಕ್ಕೆ ಅನಧಿಕೃತ ಗೈರುಹಾಜರಾಗಿ ಸರ್ಕಾರಿ ಕೆಲಸಕ್ಕೆ ಅಡಚಣೆ ಉಂಟುಮಾಡಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಜಿಲ್ಲೆ ಕಛೇರಿಯಿಂದ ಸದರಿಯವರಿಗೆ ಕರ್ತವ್ಯಕ್ಕೆ ಹಾಜರಾಗಲು ತಿಳಿಸಿ ಸೂಚನಾ ಪತ್ರ ಜಾರಿ ಮಾಡಿದ್ದು, ಸೂಚನಾ ಪತ್ರಗಳನ್ನು ಸ್ವೀಕರಿಸಿದರೂ ಕರ್ತವ್ಯಕ್ಕೆ ಹಾಜರಾಗದೇ ಕಛೇರಿ ಆದೇಶವನ್ನು ಉಲ್ಲಂಘಿಸಿರುತ್ತಾರೆಂದೂ, ಕರಡು ದೋಷಾರೋಪಣೆ ಪಟ್ಟಿಯನ್ನು ಸಿ.ಸಿ.ಎ. ನಿಯಮ 11 ರಡಿಯಲ್ಲಿ ಅನುಬಂಧ–1 ರಿಂದ 4 ನ್ನು ಶಿಸ್ತುಕ್ರಮಕ್ಕಾಗಿ ಓದಲಾದ ಕ್ರ.ಸಂ. (1) ರಲ್ಲಿ ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಜಿಲ್ಲೆಯವರು ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಅನಧಿಕೃತ ಗೈರು ಹಾಜರಿಯನ್ನು ಗಂಭೀರವಾಗಿ ಪರಿಗಣಿಸಿ ಓದಲಾದ ಕ್ರ.ಸಂ. (2) ರಲ್ಲಿ ಶ್ರೀ ಎಂ. ರಾಜಶೇಖರ್, ಡಿ–ಗ್ರೂಪ್ ನೌಕರರಿಗೆ ಸಿ.ಸಿ.ಎ. ನಿಯಮ 11 ರಡಿಯಲ್ಲಿ ದೋಷಾರೋಪಣೆ ಪಟ್ಟಿ ಅನುಬಂಧ–1 ರಿಂದ 4 ನ್ನು ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಜಿಲ್ಲೆಯವರ ಮೂಲಕ ಜಾರಿ ಮಾಡಲಾಗಿರುತ್ತದೆ. ಸದರಿ ನೌಕರರು ಇಲಾಖಾ ದೋಷಾರೋಪಣೆ ಪಟ್ಟಿಯನ್ನು ದಿನಾಂಕ : 17–11–2011 ರಂದು ಪಡೆದು ಸ್ವೀಕೃತಿಯನ್ನು ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಜಿಲ್ಲೆಯವರ ಮೂಲಕ ಸಲ್ಲಿಸಿರುತ್ತಾರೆ. ಸಾಕಷ್ಟು ಕಾಲಾವಕಾಶ ನೀಡಿದರೂ ಸದರಿ ನೌಕರರು ಲಿಖಿತ ಹೇಳಿಕೆಯನ್ನು ಸಲ್ಲಸಿಲ್ಲವಾದ್ದರಿಂದ ಅವರ ಅನಧಿಕೃತ ಗೈರು ಹಾಜರಿ ಆರೋಪದ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಆರೋಪಗಳ ಬಗ್ಗೆ ವಿವರವಾದ ವಿಚಾರಣೆ ನಡೆಸಲು ಓದಲಾದ ಕ್ರ.ಸಂ. (3) ರಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯವರನ್ನು ನೇಮಿಸಲಾಗಿರುತ್ತದೆ. ಓದಲಾದ ಕ್ರ.ಸಂ. (4) ರಲ್ಲಿ ಮಂಡನಾಧಿಕಾರಿಯಾದ ಶ್ರೀಮತಿ ಶೀಲಾ ಸರ್‌ದೇಸಾಯಿ, ಅಧೀಕ್ಷಕರು ಇವರು ಇದೇ ಪ್ರಕರಣದ ಅನುಬಂಧ–4 ರಲ್ಲಿ ಸಾಕ್ಷಿದಾರರಾಗಿರುವುದರಿಂದ ಮಂಡನಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಲು ಸಾಧ್ಯವಾಗದ ಕಾರಣ ಬೇರೆ ಮಂಡನಾಧಿಕಾರಿಯವರನ್ನು ನೇಮಿಸಲು ಕೋರಿರುತ್ತಾರೆ. ಸದರಿ ಮನವಿಯನ್ನು ಪರಿಗಣಿಸಿ ಓದಲಾದ ಕ್ರ.ಸಂ. (5) ರಲ್ಲಿ ಮಂಡನಾಧಿಕಾರಿಯನ್ನು ಬದಲಾಯಿಸಿ ಶ್ರೀ ಫಯಾಜ್ ಅಹಮ್ಮದ್, ಅಧೀಕ್ಷಕರು, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಬಳ್ಳಾರಿ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿರುತ್ತದೆ. ಓದಲಾದ ಕ್ರ.ಸಂ. (6) ರಲ್ಲಿ ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಸದರಿಯವರ ಅನಧಿಕೃತ ಗೈರು ಹಾಜರಿ ಆರೋಪ ಸಾಬೀತಾಗಿರುತ್ತದೆ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯೊಂದಿಗೆ ಸದರಿಯವರಿಗೆ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ಓದಲಾದ ಕ್ರ.ಸಂ. (7)ರಲ್ಲಿ ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಜಿಲ್ಲೆಯವರ ಮೂಲಕ ಜಾರಿ ಮಾಡಲಾಗಿರುತ್ತದೆ. ಸದರಿ ನೌಕರರು ಇಲಾಖಾ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ದಿನಾಂಕ : 30–04–2013 ರಂದು ಸ್ವೀಕರಿಸಿ ಸ್ವೀಕೃತಿಯನ್ನು ಓದಲಾದ ಕ್ರ.ಸಂ. (8)ರಲ್ಲಿ ಸಲ್ಲಿಸಿರುತ್ತಾರೆ. ಸದರಿಯವರು ಲಿಖಿತ ಹೇಳಿಕೆಯನ್ನು ಸಲ್ಲಿಸದೇ ಇರುವುದರಿಂದ ಓದಲಾದ ಕ್ರ.ಸಂ. (9)ರ ಇಲಾಖಾ ಪತ್ರದಲ್ಲಿ ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಜಿಲ್ಲೆಯವರಿಗೆ ಸದರಿ ನೌಕರರಿಂದ ಲಿಖಿತ ಹೇಳಿಕೆಯನ್ನು ಪಡೆದು 15 ದಿನಗಳೊಳಗಾಗಿ ಸಲ್ಲಿಸದಿದ್ದಲ್ಲಿ ಅಂತಿಮ ಆದೇಶವನ್ನು ಹೊರಡಿಸಲಾಗುವುದು ಎಂದು ಅಂತಿಮವಾಗಿ ತಿಳಿಸಲಾಯಿತು. ಸದರಿ ಇಲಾಖಾ ಪತ್ರವನ್ನು ಜಂಟಿ ಕೃಷಿ ನಿರ್ದೇಶಕರು, ಬಳ್ಳಾರಿ ಜಿಲ್ಲೆಯವರು ಓದಲಾದ ಕ್ರ.ಸಂ. (10) ರಲ್ಲಿ ನೌಕರರಿಗೆ ದಿನಾಂಕ : 18–6–2013 ರಂದು ಜಾರಿ ಮಾಡಿರುವ ಬಗ್ಗೆ ಮಾಹಿತಿಯನ್ನು ಇಲಾಖೆಗೆ ತಿಳಿಸಿರುತ್ತಾರೆ. ಸದರಿಯವರಿಗೆ ಸಾಕಷ್ಟು ಕಾಲಾವಕಾಶ ನೀಡಲಾಗಿದ್ದರೂ ಹಾಗೂ ಸದರಿಯವರು ಇಲಾಖೆಯ ಎಲ್ಲಾ ಪತ್ರಗಳನ್ನು ಸ್ವೀಕರಿಸಿದರೂ ಸಹ ಲಿಖಿತ ಹೇಳಿಕೆಯನ್ನು ಸಲ್ಲಿಸಿಲ್ಲವಾದ್ದರಿಂದ ಹಾಗೂ ಸದರಿಯವರ ಅನಧಿಕೃತ ಗೈರು ಹಾಜರಿ ಆರೋಪವು ಸಾಬೀತಾಗಿರುವುದರಿಂದ ಮತ್ತು ಈಗಾಗಲೇ 2007–08 ನೇ ಸಾಲಿನಲ್ಲಿ ಅನಧಿಕೃತ ಗೈರು ಹಾಜರಿಗೆ ಕುರಿತಂತೆ ಶಿಸ್ತುಕ್ರಮಕ್ಕೆ ಒಳಗಾಗಿರುತ್ತಾರೆ. ನೌಕರರು ಪದೇ ಪದೇ ಅನಧಿಕೃತ ಗೈರು ಹಾಜರಿ ಆಗುವುದನ್ನು ರೂಢಿಸಿಕೊಂಡಿರುವುದು, ನೌಕರರಿಗೆ ಸರ್ಕಾರಿ ಕೆಲಸದಲ್ಲಿ ಕಾರ್ಯ ನಿರ್ವಹಿಸಲು ಆಸಕ್ತಿ ಇಲ್ಲದಿರುವುದು ಕಂಡು ಬಂದಿರುತ್ತದೆ. ಸದರಿಯವರ ಅನಧಿಕೃತ ಗೈರು ಹಾಜರಿ ಆರೋಪ ಸಾಬೀತಾಗಿರುವುದರಿಂದ ಹಾಗೂ ಇಂದಿನವರೆಗೂ ಕಛೇರಿಯ ಕರ್ತವ್ಯಕ್ಕೆ ಹಾಜರಾಗದೇ ಇರುವ ಪ್ರಯುಕ್ತ ಸದರಿಯವರನ್ನು ಆರೋಪಿ ಎಂದು ಪರಿಗಣಿಸಿ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ : ಸಿಬ್ಬಂದಿ–1/ವಿಚಾರಣೆ–5/10/2010–11, ದಿನಾಂಕ : 20–08–2013**

ಈ ಕೆಳಗೆ ಸಹಿ ಮಾಡಿರುವ ಡಾ॥ ಕೆ.ವಿ. ಸರ್ವೇಶ್, ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಆದ ನಾನು ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಎಂ. ರಾಜಶೇಖರ್, ಡಿ–ಗ್ರೂಪ್ ನೌಕರರು, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಬಳ್ಳಾರಿ ಇವರ ಅನಧಿಕೃತ ಗೈರು ಹಾಜರಿ

ಆರೋಪ ಸಾಬೀತಾಗಿರುವುದರಿಂದ ಆರೋಪಿ ಎಂದು ಪರಿಗಣಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(vi) ನಿಯಮದಡಿಯಲ್ಲಿ ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಸಿರುತ್ತೇನೆ.

1. ಸದರಿಯವರನ್ನು ಸರ್ಕಾರಿ ಸೇವೆಯಿಂದ **"ಕಡ್ಡಾಯ ನಿವೃತ್ತಿ"** ಗೊಳಿಸಿ ಆದೇಶಿಸಿರುತ್ತೇನೆ.
2. ಸದರಿಯವರ ಅನಧಿಕೃತ ಗೈರು ಹಾಜರಿ ಅವಧಿಯನ್ನು **"ಅನಧಿಕೃತ ಗೈರು ಹಾಜರಿ"** ಎಂದೇ ಪರಿಗಣಿಸಿ ಆದೇಶಿಸಿರುತ್ತೇನೆ.

**ಡಾ॥ ಕೆ.ವಿ. ಸರ್ವೇಶ್**
ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ
ಬೆಂಗಳೂರು.

**PR.2233**
**SC 10**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಚಿಕ್ಕಮಗಳೂರು ಜಿಲ್ಲೆ

**ಸಂಖ್ಯೆ : ಕಾಅಚಿಉವಿ–1/ಕಾಪಕಾ/ ಎಫ್–07/2012, ದಿನಾಂಕ : 16–08–2013.**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| 1. ಶ್ರೀ ಸಿ.ಕೆ. ಗಣಪತಿ ಬಿನ್ ಸಿ.ಜಿ. ಕೃಷ್ಣ, ಸುಮಾರು 44 ವರ್ಷ, ಕುಂದೂರು, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ.<br>2. ಶ್ರೀಮತಿ ಶಾಲಿನಿ ಕೋಂ. ಸಿ.ಕೆ. ಗಣಪತಿ ಸುಮಾರು 37 ವರ್ಷ,<br>ಇಬ್ಬರೂ ವಾಸ : ಪಂಪೆ, ಕೂದುವಳ್ಳಿ ಎಸ್ಟೇಟ್, ವಸ್ತಾರೆ ಅಂಚೆ, ಚಿಕ್ಕಮಗಳೂರು ತಾಲ್ಲೂಕು | **ವಿರುದ್ಧ** | ದಿ ಪ್ರೊಪ್ರೈಟರ್, ವಿಂಟರ್ ಗ್ರೀನ್ ರೆಸಾರ್ಟ್ಸ್, ಲಕ್ಯಾ ಕ್ರಾಸ್, ಚಿಕ್ಕಮಗಳೂರು ತಾಲ್ಲೂಕು. |

### ಪ್ರಕಟಣೆ

ಅರ್ಜಿದಾರರಾದ **ಶ್ರೀ ಸಿ.ಕೆ. ಗಣಪತಿ ಮತ್ತು ಶ್ರೀಮತಿ ಶಾಲಿನಿ** ಇವರುಗಳು **ಸುಮನ್** ರವರು **ದಿನಾಂಕ : 15–08–2011 ರಂದು** 1ನೇ ಪ್ರತಿವಾದಿಯ ಆದೇಶದ ಮೇರೆಗೆ ಅವರಿಗೆ ಸೇರಿದ ತೋಟದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಅಪಘಾತವಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿ, ತಾವು ಮೃತರ ಅವಲಂಭಿತರೆಂದು ತಿಳಿಸಿ ಪರಿಹಾರವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಭಿತರು ಎಂದು ಹೇಳಿಕೊಳ್ಳುವದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿರತು **"ಯಾರೂ ಇಲ್ಲ"** ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಕೆ. ಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಉಪ ವಿಭಾಗ–1, ಚಿಕ್ಕಮಗಳೂರು.

**P.R. 2181**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 24 ಎಲ್‌ಆರ್‌ಎಂ 2013, ಬೆಂಗಳೂರು, ದಿನಾಂಕ:20ನೇ ಆಗಸ್ಟ್, 2013**

ಪ್ರಕಾಶ್ ಸ್ಪಾಂಜ್ ಐರನ್ ಅಂಡ್ ಪವರ್ ಪ್ರೈವೇಟ್ ಲಿ., ಬೆಂಗಳೂರು ಇವರಿಗೆ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕಿನ ಹೆಗ್ಗೆರೆ, ಕಾಪರಹಳ್ಳಿ ಮತ್ತು ಬಡವನಹಳ್ಳಿ ಕಾವಲು ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ 114 ಎಕರೆ 11.12 ಗುಂಟೆ ಭೂಮಿಯನ್ನು ಕೈಗಾರಿಕಾ ಉದ್ದೇಶಕ್ಕಾಗಿ ಅಂದರೆ, ಎಲ್.ಎನ್.ಜಿ. ಬೇಸ್ಡ್ ಪವರ್ ಪ್ಲಾಂಟ್ ಪ್ರಾಜೆಕ್ಟ್ ಮತ್ತು ಇಂಟಿಗ್ರೇಟೆಡ್ ಸ್ಟೀಲ್ ಪ್ಲಾಂಟ್ ಸ್ಥಾಪಿಸುವ ಸಲುವಾಗಿ ಜಮೀನು ಖರೀದಿಸಲು ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು (1974)ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1ಎ)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿದ್ದು, ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ರ ಕಲಂ 95ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಸದರಿ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

9) ಸದರಿ ಜಮೀನುಗಳು ಒಂದಕ್ಕೊಂದು ಹೊಂದಿಕೊಂಡಿರದೆ ಇರುವುದರಿಂದ ಈ ಜಮೀನುಗಳಿಗೆ ರಸ್ತೆ ಸಂಪರ್ಕ ಪಡೆಯುವ ಷರತ್ತಿಗೆ ಒಳಪಡಿಸಿದೆ.

10) ಸದರಿ ಜಮೀನುಗಳಿಗೆ ಸಂಬಂಧಪಟ್ಟಂತೆ ಕೋರ್ಟ್‌ನಲ್ಲಿ ವ್ಯಾಜ್ಯಗಳು ಬಾಕಿ ಇದ್ದಲ್ಲಿ ಅವರ ಹಂತದಲ್ಲಿಯೇ ಪರಿಹರಿಸಿಕೊಳ್ಳುವ ಷರತ್ತಿಗೆ ಒಳಪಡಿಸಿದೆ.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

P.R. 2228

SC 20

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 43 ಎಲ್‌ಆರ್‌ಎಂ 2013, ಬೆಂಗಳೂರು, ದಿನಾಂಕ: 5ನೇ ಆಗಸ್ಟ್, 2013**

ಅಧ್ಯಕ್ಷರು, ಸುರೇಶ ಅಂಗಡಿ ಎಜುಕೇಷನ್ ಫೌಂಡೇಶನ್ ಸಾವಗಾಂವ ಇವರಿಗೆ ಬೆಳಗಾವಿ ತಾಲ್ಲೂಕಿನ ಸಾವಗಾಂವ ಗ್ರಾಮದ ರಿ.ಸ.ನಂ. 75/ಅ+ಬ ಕ್ಷೇತ್ರದಲ್ಲಿನ 19 ಎಕರೆ 16 ಗುಂಟೆ ಪೈಕಿ 03 ಎಕರೆ 08 ಗುಂಟೆ ಜಮೀನನ್ನು ಶಾಲಾ ಕಟ್ಟಡ ಕಟ್ಟುವ ಉದ್ದೇಶಕ್ಕಾಗಿ ಖರೀದಿಸಲು ಜಿಲ್ಲಾಧಿಕಾರಿಗಳು, ಬೆಳಗಾವಿ ಇವರ ಅಧಿಕೃತ ಜ್ಞಾಪನ ಸಂಖ್ಯೆ: ಕಂಶಾ:ಭೂಸು/ವಿವ/83/2005–06, ದಿನಾಂಕ: 04–10–2006 ರಲ್ಲಿ ಅನುಮತಿ ನೀಡಿ ಆದೇಶಿಸಲಾಗಿತ್ತು. ಆದರೆ ಸದರಿ ಜಮೀನನ್ನು ನಿಗಧಿತ ಉದ್ದೇಶಕ್ಕೆ ಬಳಸಿಕೊಳ್ಳಲು ಸಾಧ್ಯವಾಗದ ಪ್ರಯುಕ್ತ ಅವಧಿ ವಿಸ್ತರಿಸಲು ಜಿಲ್ಲಾಧಿಕಾರಿಗಳು, ಸಲ್ಲಿಸಿದ ಪ್ರಸ್ತಾವನೆಯನ್ನು ಪರಿಗಣಿಸಿ, ಸರ್ಕಾರವು ದಿನಾಂಕ: 03–10–2008ರಿಂದ ಅನ್ವಯವಾಗುವಂತೆ ಇನ್ನೂ ಐದು ವರ್ಷಗಳವರೆಗೆ ಕಾಲಾವಧಿ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

P.R. 2229

SC 20

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 9 ಭೂದಾಸೇ (1) 2013, ಬೆಂಗಳೂರು, ದಿನಾಂಕ: 20ನೇ ಆಗಸ್ಟ್, 2013**

**ವಿಷಯ** : ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ ಜಂಟಿ ನಿರ್ದೇಶಕರು ವೃಂದದ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2013 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ

**ಉಲ್ಲೇಖ** : ಸಮಸಂಖ್ಯೆಯ ದಿನಾಂಕ: 16–05–2013ರ ಅಧಿಸೂಚನೆ

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಜ್ಯೇಷ್ಠತಾ ಪಟ್ಟಿಯ ಆಧಾರದ ಮೇಲೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಭೂದಾಖಲೆಗಳ ಜಂಟಿ ನಿರ್ದೇಶಕರು ವೃಂದದ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2013ರಲ್ಲಿದ್ದಂತೆ ದಿನಾಂಕ: 16–05–2013ರ ಸಮಸಂಖ್ಯೆಯ ಅಧಿಸೂಚನೆಯಲ್ಲಿ ಪ್ರಕಟಿಸಿ, ಸದರಿ ಜ್ಯೇಷ್ಠತಾ ಪಟ್ಟಿಯ ಪ್ರಕಟಣೆಯಿಂದ ತೊಂದರೆಗೊಳಗಾಗುವ ಅಥವಾ ಪಟ್ಟಿಯಲ್ಲಿನ ನ್ಯೂನ್ಯತೆಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸದರಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಈ ದಿಸೆಯಲ್ಲಿ ನಿಗದಿತ ಅವಧಿಯ ಒಳಗಡೆ ಯಾವುದೇ ಅಹವಾಲುಗಳು ಸ್ವೀಕೃತವಾಗಿರುವುದಿಲ್ಲ. ಆದುದರಿಂದ, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ ಜಂಟಿ ನಿರ್ದೇಶಕರು ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2013 ರಲ್ಲಿದ್ದಂತೆ ಅನುಬಂಧದಲ್ಲಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಂಭುಲಿಂಗಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ).

**ಅನುಬಂಧ**

**ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ**
**ಜಂಟಿ ನಿರ್ದೇಶಕರು ವೃಂದದ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯ ಪ್ರಸ್ತಾವನೆ ದಿನಾಂಕ : 01–01–2013 ರಲ್ಲಿದ್ದಂತೆ**

| ಕ್ರ.ಸಂ. | ಅಧಿಕಾರಿಯ ಹೆಸರು ಶ್ರೀಯುತರಾದ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಭೂ.ಜ.ನಿ. ಹುದ್ದೆಗೆ ಬಡ್ತಿ ಹೊಂದಿದ ದಿನಾಂಕ | ಷರಾ |
|---|---|---|---|---|---|
| | ಮುದ್ದುರಂಗಪ್ಪ | 04–03–1952 | 21–01–1980 | 17–06–1992 | ದಿ॥ 31–03–2012ರಂದು ವಯೋ ನಿವೃತ್ತಿ ಹೊಂದಿರುತ್ತಾರೆ |
| 1 | ಎಂ. ಶಿವಮಾದಯ್ಯ | 05–08–1954 | 21–01–1980 | 18–06–1992 | |
| | ಸೈಯದ್ ಸಜ್ಜದ್ ಅಹ್ಮದ್ | 17–12–1950 | 21–01–1980 | 14–06–1993 | ದಿ॥ 31–12–2010ರಂದು ವಯೋ ನಿವೃತ್ತಿ ಹೊಂದಿರುತ್ತಾರೆ |
| 2 | ಕೃಷ್ಣಮೂರ್ತಿ ಗೋಪಾಲ್ | 09–03–1956 | 14–09–1984 | 06–09–2006 | ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 39 ಭೂದಾಸೇ(1) 2005, ದಿನಾಂಕ: 26–05–2010ರಲ್ಲಿ ಭೂ.ಜಂ.ನಿ. ಹುದ್ದೆಗೆ ಮುಂಬಡ್ತಿ ಪಡೆದಿರುತ್ತಾರೆ. |
| 3 | ಸೈಯದ್ ಇಲಿಯಾಸ್ ಅಹ್ಮದ್ | 26–11–1955 | 28–09–1984 | 06–09–2006 | |
| 4 | ಪಿ. ಬಸವರಾಜು | 04–08–1956 | 27–09–1984 | 20–02–2009 | |
| 5 | ವಿ. ಪ್ರಸನ್ನಕುಮಾರ್ | 27–05–1955 | 03–02–1986 | 05–04–2012 | ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 8 ಭೂದಾಸೇ(1) 2011, ದಿನಾಂಕ: 05–04–2012ರಲ್ಲಿ ಭೂ.ಜಂ.ನಿ. ಹುದ್ದೆಗೆ ಮುಂಬಡ್ತಿ ಪಡೆದಿರುತ್ತಾರೆ. |
| 6 | ಎನ್.ಸಿ. ವಸಂತಕುಮಾರ್ | 27–04–1952 | 30–01–1986 | 05–04–2012 | ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 8 ಭೂದಾಸೇ(1) 2011, ದಿನಾಂಕ: 05–04–2012ರಲ್ಲಿ ಭೂ.ಜಂ.ನಿ. ಹುದ್ದೆಗೆ ಮುಂಬಡ್ತಿ ಪಡೆದಿರುತ್ತಾರೆ. ದಿ॥ 30–04–2012 ರಂದು ವಯೋನಿವೃತ್ತಿ ಹೊಂದಿರುತ್ತಾರೆ. |

**ಶಂಭುಲಿಂಗಯ್ಯ,**

**P.R. 2230**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ).

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 60 ಎಲ್‌ಜಿಕೆ 2013, ಬೆಂಗಳೂರು, ದಿನಾಂಕ: 10ನೇ ಜೂನ್ 2013.**

**ನಮೂನೆ–29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ರ 68ನೇ ಪ್ರಕರಣದ (5)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರ ಚಲಾಯಿಸಿ ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕ: 06–12–2012ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/231/2011–12, ದಿನಾಂಕ: 13–08–2012 ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ 'ಬಿ' ಖರಾಬು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲಾತಿ ಹಾಗೂ ಜಿಲ್ಲಾಧಿಕಾರಿ, ಚಿಕ್ಕಬಳ್ಳಾಪುರ ಜಿಲ್ಲೆ ಇವರ ವರದಿ ಮೇರೆಗೆ ಪರಿಶೀಲಿಸಿದ ನಂತರ 'ಬಿ' ಖರಾಬು ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸುತ್ತದೆ.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ಅಣಕನೂರು ಗ್ರಾಮ |
| ತಾಲ್ಲೂಕು | ಚಿಕ್ಕಬಳ್ಳಾಪುರ ತಾಲ್ಲೂಕು |
| ಜಿಲ್ಲೆ | ಚಿಕ್ಕಬಳ್ಳಾಪುರ ಜಿಲ್ಲೆ |
| ಸದರಿ ಭಾಗದ ವರ್ಣನೆ | 'ಬಿ' ಖರಾಬು ಜಮೀನು |
| ಸರಿ ಸುಮಾರು ವಿಸ್ತೀರ್ಣ | ಅಣಕನೂರು ಗ್ರಾಮದ ಸ.ನಂ. 19ರಲ್ಲಿ 3–35 ಎಕರೆ/ಗುಂಟೆ ವಿಸ್ತೀರ್ಣದ ಜಮೀನು |
| ಸಾರ್ವಜನಿಕ ರಸ್ತೆ/ಬೀದಿ/ಗಲ್ಲಿ/ದಾರಿ/ಅಥವಾ ಅದರ ಭಾಗ | ಅಣಕನೂರು ಗ್ರಾಮ |
| ಮೇರೆಗಳು | ಪೂರ್ವಕ್ಕೆ : ತಾಂಡ್ರಮಾಕಲಹಳ್ಳಿ ಗ್ರಾಮದ ಗಡಿ<br>ಪಶ್ಚಿಮಕ್ಕೆ : ಸ.ನಂ. 18 ಮತ್ತು 216ರ ಜಮೀನು<br>ಉತ್ತರಕ್ಕೆ : ತಾಂಡ್ರಮಾಕಲಹಳ್ಳಿ ಗ್ರಾಮದ ಗಡಿ<br>ದಕ್ಷಿಣಕ್ಕೆ : ರಸ್ತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–1).

**P.R. 2231**
**SC 100**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 39 ಎಲ್ಆರ್ಎಂ 2013, ಬೆಂಗಳೂರು, ದಿನಾಂಕ: 30ನೇ ಜುಲೈ, 2013**

ನಿರ್ದೇಶಕರು, ಕಾರ್ಗಿಲ್ ಇಂಡಿಯಾ ಪ್ರೈ ಲಿ., ನವದೆಹಲಿ ಇವರಿಗೆ ಹರಿಹರ ತಾಲ್ಲೂಕು, ಬೆಳ್ಳೂಡಿ ಗ್ರಾಮದ ಸ.ನಂ. 121/1ಪಿ3, 22/2ಪಿ ಹಾಗೂ ಇತರೆಗಳಲ್ಲಿ ಹೀಗೆ ಒಟ್ಟು 49–04 ಎಕರೆ ಕೃಷಿ ಜಮೀನುಗಳನ್ನು ದ್ರವ ರೂಪದ ಗ್ಲೋಕೋಸ್ ಮತ್ತು ಮಾಲ್ಟೋಡೆಕ್ಸ್‌ಟ್ರಿನ್ ಉತ್ಪಾದಿಸಲು ಮೆಕ್ಕೆ ಜೋಳ ಆಧಾರಿತ ಆಹಾರ ಸಂಸ್ಕರಣಾ ಘಟಕ ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು (1974)ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿದ್ದು, ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ರ ಕಲಂ 95ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

9) ಸದರಿ ಸಂಸ್ಥೆಯು ಕೋರ್ಟ್‌ನಲ್ಲಿ ಬಾಕಿ ಇರುವ ವ್ಯಾಜ್ಯಗಳನ್ನು ಅವರ ಹಂತದಲ್ಲಿಯೇ ಪರಿಹರಿಸಿಕೊಳ್ಳುವ ಷರತ್ತಿಗೆ ಒಳಪಡಿಸಿದೆ.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 2232**

**SC 20**

## ಜಿಲ್ಲಾಧಿಕಾರಿ ಹಾಗೂ ಜಿಲ್ಲಾದಂಡಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ

### ಅಧಿಸೂಚನೆ

### ಸಂಖ್ಯೆ: ಎಂಎಜಿ 1 ಸಿಆರ್–26/12–13/19239, ಬೆಂಗಳೂರು, ದಿನಾಂಕ: 04ನೇ ಸೆಪ್ಟೆಂಬರ್, 2013.

1962ರ ಕರ್ನಾಟಕ ನಿಕ್ಷೇಪ ನಿಧಿ ಕಾಯಿದೆ ಸೆ4(ಬಿ) ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿವಮೊಗ್ಗ ಜಿಲ್ಲಾಧಿಕಾರಿ ವಿಪುಲ್ ಬನ್ಸಲ್ ಆದ ನಾನು ಹಿತಾಸಕ್ತಿಯುಳ್ಳ ವ್ಯಕ್ತಿಗಳಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶಿವಮೊಗ್ಗ ತಾಲ್ಲೂಕು ಹಸೂಡಿ ಗ್ರಾಮದಲ್ಲಿ ಶ್ರೀಮತಿ ವನಿತಾ ಕೊಂ ಸುಬ್ರಮಣಿ ಎಂಬುವವರಿಗೆ ಸೇರಿದ ಮನೆ ನಿವೇಶನದಲ್ಲಿ ನಿಧಿ ನಿಕ್ಷೇಪ ದೊರೆತಿದ್ದು, ಅವು ಈ ಕೆಳಗೆ ವಿವರಣೆ ನೀಡಿದಂತೆ ಇರುತ್ತದೆ. ಈ ಸಂಬಂಧ ಹಿತಾಸಕ್ತಿಯುಳ್ಳವರು ಸಿಕ್ಕಿರುವ ನಿಧಿ ನಿಕ್ಷೇಪದ ಮೇಲೆ ತಮ್ಮ ಹಕ್ಕು ಸಾಧಿಸುವುದಿದ್ದಲ್ಲಿ, ದಿನಾಂಕ: 21–10–2013ರಂದು ಮಧ್ಯಾಹ್ನ 3–00 ಘಂಟೆಗೆ ಖುದ್ಧಾಗಿಯಾಗಲೀ ಅಥವಾ ತಮ್ಮ ಪ್ರತಿನಿಧಿಯ ಮೂಲಕವಾಗಲೀ ಹಾಜರಾಗಿ ತಮ್ಮ ಹಕ್ಕನ್ನು ಪ್ರತಿಪಾದಿಸುವುದು.

| ಕ್ರ. ಸಂ. | ನಿಧಿಯ ಸ್ವರೂಪ | ಪ್ರಮಾಣ | ತೂಕ | ಅಂದಾಜು ಮೌಲ್ಯ |
|---|---|---|---|---|
| 1 | ಬಂಗಾರದ ನಾಣ್ಯಗಳು | 131 | 131.4 ಗ್ರಾಂ | 3,27,600/– |
| 2 | ಬಂಗಾರದ ಸರ | 1 | 7.9 ಗ್ರಾಂ | 22,360/– |
| 3 | ಸಣ್ಣ ತಾಮ್ರದ ಕರಡಿಗೆ (ಡಬ್ಬಿ) | 1 | – | – |
| 4 | ನಿಧಿ ವಿಲೇವಾರಿಯಿಂದ ಆರೋಪಿಗಳು ಪಡೆದ ನಗದು | – | – | 20,000 |

ನಿಧಿ ದೊರೆತ ದಿನಾಂಕ: 20–06–2011 ನಿಧಿಯು ದೊರೆತ ಜಾಗ: ಶಿವಮೊಗ್ಗ ತಾಲ್ಲೂಕು ಹಸೂಡಿ ಗ್ರಾಮದ ವನಿತಾ ಕೋಂ ಸುಬ್ರಮಣಿ ಅವರ ನಿವೇಶನ.

ವಿಪುಲ್ ಬನ್ಸಲ್,

ಜಿಲ್ಲಾಧಿಕಾರಿ, ಶಿವಮೊಗ್ಗ

## OFFICE OF THE DEPUTY COMMISSIONER & DISTRICT MAGISTRATE, SHIMOGA DISTRICT

### NOTIFICATION

### MAG 1 CR-26/12-13/19239, Dated : 4th September, 2013

In Exercise of Powers conferred on me under the provision of sub-section (b) of section 4 of the Karnataka Treasure Trove Act 1962, I Vipul Bansal, Deputy Commissioner, Shimoga District here by notify to the information of those interested that a treasure trove has been found in Hosudi Village Shimoga Taluk. The particulars of which are furnished below and that any person claiming the treasure or any part there of should appear personally or by agent before the undersigned at 3.00 pm. on 21-10-2013. And put forth their claims if any.

| Sl. No. | Nature of Treasure | Quantity | Weighment In Grams | Approximate Value |
|---|---|---|---|---|
| 1 | Gold Coin | 131 | 131.4 | 3,27,600/- |
| 2 | Gold Chain | 1 | 7.9 | 22,600/- |

| Sl. No. | Nature of Treasure | Quantity | Weighment In Grams | Approximate Value |
|---|---|---|---|---|
| 3 | Small Copper Container | 1 | - | - |
| 4 | Cash Recovered from Accused | - | - | 20,000 |

Date of which the Treasure was found : 20-06-2011.

Place Where the Treasure was found : Building site belonging Smt.Vanita w/o Subramani Hosudi Village Shimoga taluk

**P.R. 2236**

**Vipul Bansal,**
**Deputy Commissioner,**
**Shimoga District, Shimoga**

## FOOD AND CIVIL SUPPLIES AND CONSUMERS AFFAIRS SECRETARIAT

### NOTIFICATION

### No. FCS:26:RPR:2012, Bangalore, Dated:26-06-2013

As per Government of India`s letter No.2(1)/2012-PY-I, dated 10th December 2012, the Government of Karnataka in its notification No.FCS 26 RPR 2012, dated 07-01-2013, had communicated the price of levy rice price for KMS 2012-13; Earlier to this notification in its letter No.FCS 26 RPR 2012, dated 15-12-2012, Government of Karnataka had permitted the Commissioner, Food, Civil Supplies and Consumer Affairs Department to re-fix the target of levy rice from 3,00,000 MT`s; 1,50,000 MT`s; directing the Karnataka Food and Civil Supplies Corporation to complete the levy procurement based on the re-fixed target within 31-3-2013.

Now, the Commissioner, Food, Civil Supplies and Consumer Affairs Department in his letter No.CFS:CS;Levy:02:2012-13, dated 20th June 2013 has informed to the government that as aganist the target only 39% of levy rice is procured and therefore has requested the government to extend the time limit up to 31-7-2013 to achieve the entire target.

In view of the above, government is hereby extends the time limit up to 31-7-2013, to procure levy rice under KMS 2012-13, by permitting the Karnataka Food and Civil Supplies Corporation to procure the balance quantity of rice from the rice millers and make payments to the millers at the rates fixed by Government of India.

The Karnataka food and Civil Supplies Corporation shall take precautionary steps to prevent any recycling of rice allotted by the Government of India under Centrally Sponsored Schemes as mill point levy.

By Order and in the name of the Governor of Karnataka

**A R.VIJAYANANDA SHARMA,**
Under Secretary to Government,
Food, Civil Supplies and Consumer Affairs Department.

**P.R. 2158**
**S.C. 200**

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

### ಅಧಿಸೂಚನೆ

### ಕ್ರಮಾಂಕ : ಕಗೃಮಂ/ಭೂಸ್ವಾವಿ/ತು/57/2008–09, ದಿನಾಂಕ: 3ನೇ ಜುಲೈ, 2013.

ಕರ್ನಾಟಕ ಕಾಯ್ದೆ 33ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂಸ್ವಾಧೀನ ಕಾಯ್ದೆ (ಕೇಂದ್ರ ಕಾಯ್ದೆ 46)ರಲ್ಲಿ ವಿಧಿತವಾದ ಅಧಿಕಾರದಂತೆ ಹಾಗೂ ಕರ್ನಾಟಕ ಜನರಲ್ ಕ್ಲಾಜಸ್ ಆಕ್ಟ್ 1897 ಕಲಂ 21ರ ಅನ್ವಯ ಈ ಕಛೇರಿಯಿಂದ ಹೊರಡಿಸಲಾಗಿದ್ದ ಕಲಂ 4(1)ರ ಅಧಿಸೂಚನೆ ಕ್ರಮಾಂಕ: ಕಗೃಮಂ/ಭೂಸ್ವಾವಿ/ತು/57/2008–09 ದಿನಾಂಕ:24–10–2009ರ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದ ಭಾಗ–3 ಪುಟ 269 ರಿಂದ 274 ರವರೆಗೆ ದಿನಾಂಕ 14–01–2010ರ ರಾಜ್ಯ ಪತ್ರದಲ್ಲಿ ಪ್ರಕಟವಾಗಿದ್ದು, ದಿನಾಂಕ:27–07–2012ರ ಮಂಡಳಿ ಸಭೆಯ ನಿರ್ಣಯದಂತೆ, ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕೋರಾ ಹೋಬಳಿ, ವಸಂತನರಸಾಪುರ ಗ್ರಾಮದಲ್ಲಿ ಸಂಬಂಧಪಟ್ಟ ಜಮೀನುಗಳ ಭೂಸ್ವಾಧೀನವನ್ನು ಕೈಬಿಟ್ಟು ಸದರಿ ಕಲಂ ೪(೧)ರ ಅಧಿಸೂಚನೆಯನ್ನು ಹಿಂತೆಗೆದುಕೊಳ್ಳಲಾಗಿದೆ.

**P.D. 107**
**S.C: 50**

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

## MINISTRY OF SHIPPING NEW MANGALORE PORT TRUST

## Panambur, Mangalore

## NOTIFICATION

## No.1/7/2012/CPSM 1 dated the 23rd August 2013

In exercise of the powers conferred by Sub-section (1) of section 124, read with sub-section (1) of Section 132 of the Major Port Trusts Act, 1963 (38 of 1963), the Board of Trustees of New Mangalore Port Trust hereby approves the New Mangalore Port Trust Employees (Recruitment, Seniority and Promotion) Amendment Regulations, 2013 as set-out in the Schedule annexed to this notification.

The said Regulations shall come into force from the date of publication of this Notification in the Official Gazette.

**SCHEDULE**

**NEW MANGALORE PORT TRUST**

New Mangalore Port Trust Employees (Recruitment, Seniority and Promotion) Amendment Regulations, 2013

In exercise of the powers conferred by Section 28 of the Major Port Trusts Act, 1963 (38 of 1963), the Board of Trustees of the New Mangalore Port Trust hereby makes the following regulations further to amend the New Mangalore Port Trust Employees (Recruitment, Seniority and Promotion) Regulations 1980 and amended from time to time.

1. These Regulations may be called the New Mangalore Port Trust Employees (Recruitment, Seniority and Promotion) Amendment Regulations, 2013.

| Sl. No. | Name of the Post | No.of Posts | Classi-fication | Scale of Pay | Whether Selection or Non-Selection | Upper Age limit for direct recruitment (in yrs) | Educational and other qualifications prescribed for direct recruitment | Whether Age & Eduacational Qualifications prescribed for direct recruits will apply in case of promotes and persons holding analogous post in other department and deputationists | Period of Probation (in Years) | Method of recruitment (Whether by direct recruitment or by promotion/ absorption deputation) | In case of Promotion / absorption/ deputation grades from which it shoould be made | Remarks |
|---|---|---|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** |
| 170 (C) | Sr.Store Issuer | 2 | Class-III | ₹ 9400-22000 | Selection | 30 | ITI Certificate in Mechanical or Electrical Trade | N.A | 2 years | Direct Recruitment | N.A | Nil |

**ASSISTANT SECRETARY Gr - I,**
NEW MANGALORE PORT,
Panambur, Mangalore

# नव मंगलूर पत्तन न्यास
# पणंबूर, मंगलूर
# अधिसूचना

सं0 1/7/2012/सीपीएसएम 1 दिनांक अगस्त 2013

महा पत्तन न्यास अधिनियम, 1963 (1963 का 38) की धारा 132 की उपधारा (1) के साथ पठित धारा 124 की उपधारा (1) द्वारा प्रदत्त शक्तियों का प्रयोग करते हुए, नव मंगलूर पत्तन न्यास के न्यासी मंडल द्वारा बनाए गए और इस अधिसूचना के साथ संलग्न अनुसूची में दिए गए नव मंगलूर पत्तन न्यास कर्मचारी (भर्ती, वरीयता व पदोन्नति) संशोधन विनियम 2013 का अनुमोदन करता है ।

उक्त विनियम सरकारी राजपत्र में इस अधिसूचना का प्रकाशन की तारीख से प्रवृत्त होंगे ।

## अनुसूची
## नव मंगलूर पत्तन न्यास

नव मंगलूर पत्तन न्यास कर्मचारी (भर्ती, वरिष्ठता व पदोन्नति) संशोधन विनियम 2013

महा पत्तन न्यास अधिनियम 1963 (1963 का 38) की धारा 28 द्वारा प्रदत्त शक्तियों का प्रयोग करते हुए, नव मंगलूर पत्तन न्यास का न्यासी मंडल, नव मंगलूर पत्तन न्यास कर्मचारी (भर्ती, वरिष्ठतातथा पदोन्नति) विनियम 1980, जो समय-समय पर संशोधित है, में पुनः संशोधन करते हुए निम्नलिखित विनियम बनाता है।

1. इन विनियमों को नव मंगलूर पत्तन न्यास कर्मचारी (भर्ती, वरिष्ठता तथा पदोन्नति) संशोधन विनियम, 2013 कहा जाएगा ।

| क्र सं0 | पद का नाम | पदों की संख्या | वर्गीकरण | वेतनमान (रू) | क्या पद प्रवरण का है या गैर प्रवरण | सीधी भर्ती के लिए उच्च आयु सीमा (वर्षों में ) | सीधी भर्ती के लिए निर्धारित शैक्षिक तथा अन्य योग्यताएँ | क्या सीधी भर्ती के लिए निर्धारित (क) आयु (ख) शैक्षिक योग्यताएँ (ग) अनुभव पदोन्नति / आमेलन / प्रतिनियुक्ति के मामले में लागू होगी । | परिवीक्षा की अवधि (वर्षों में ) | भर्ती की विधि (क्या सीधी भर्ती द्वारा अथवा पदोन्नति /आमेलन / प्रतिनियुक्ति द्वारा) | पदोन्नति /आमेलन / प्रतिनियुक्ति के मामले में संवर्ग जिनमें से किया जाना होगा | टिप्पणी |
|---|---|---|---|---|---|---|---|---|---|---|---|---|
| 1. | 2. | 3. | 4. | 5. | 6. | 7. | 8. | 9. | 10. | 11. | 12. | 13. |
| 170 (सी) | वरिष्ठ भंडार जारी - कर्ता | 2 | श्रेणी - III | 9400-22000 | चयन | 30 वर्ष | मेकॉनिकल या इलेक्ट्रिकल ट्रेड में आईटीआई प्रमाण पत्र । | लागू नहीं । | 2 वर्ष | सीधी भर्ती । | लागू नहीं । | शून्य |

**Assistant Secretary Gr.I,**
New Mangalore Port Trust,
Panambur, Mangalore.

**PD. 109**
**S.C. 10**

## OFFICE OF THE CHIEF JUDICIAL MAGISTRATE BANGALORE RURAL DISTRICT, BANGALORE.

**Draft Notification**

**Date: 06.09.2013**

It is Here by Notified to the General public that the following Unclaimed Vehcles are in the Custedy of Electronic City police Station , Bangalore City which are Seized under the various Cases / Ci, miss and N,C,R Cases

| Sl.No | Type Vehicle | Vehicle No, | Chasis No, | Eng, No, | Value |
|---|---|---|---|---|---|
| 1. | 250/10 | Bajaj Boxer KA 05 ER 4675 | DMMBKM 11490 | DFFBKM 52042 | 4,300/-Rs |
| 2. | 250/10 | Bajaj Pulsur KA 05 EQ 2825 | BHQBKH 3623 | DHUBKF 39789 | 7,200/- Rs |
| 3. | Bajaj kawsaki KA 02 ED 8711 | DHMVNO 74659 | DFFHC 84D16 | | 5,800/- Rs |
| 4. | Hero,Honda spender TN 24 U 4023 | HAIDEA 89 C28 D 15 | MBIHA 10EE89C20725 | | 2,600/- Rs |
| 5. | Bajaj CT 100 KA 02 ES 3071 | BUMB CM 51683 | DUFBM12928 | | 6,800/- Rs |
| 6. | Bajaj CT 100 KA-05 EU 8364 | DUMBMF66102 | DUFEMF00542 | | 8,500/- Rs |
| 7. | TVS XL TN-27 M- 0399 | =Nil= | P 1907F149968 | | 2,900/- Rs |
| 8. | TVS XL KA-51 Q 1501 | 001K71204087 | MD621BD1572K56193 | | 3,100/- Rs |
| 9. | TVS XL KA-05 EB 4981 | =Nil= | MD621BD1892C14137 | | 1,800/- Rs |
| 10. | Suzuki Sumuri KA-02 X-7434 | 7903M308374 | 7903F259975 | | 3,800/- Rs |
| 11. | Bajaj discover KA-51 Q 107 | JNJBPF88945 | MD2DSJNZZPCE79282 | | 5,200/- Rs |
| 12. | Yamaha KA-01 S 3544 | IL7013312 | 003I7-013312 | | 7,200/- Rs |
| 13. | Hero Honda spelnder KA-03 V 2379 (ಅಸಲಿ ನಂ..AP-28 AK 3201) | 03J18E24495 | 03J20F23874 | | 3800/- Rs |
| 14. | Hero Honda spelnder KA-05 EK 7189 | 02F18E06005 | 02F06633 | | 3,900/- Rs |
| 15. | Kenetic Honda KA-03 ED 5306 | NIETH 211459 | NIFTH215336 | | 2,800/- Rs |
| 16. | TVS Fiero F2 KA-02 S 4319 | 0E1G32012723 | MD624 CE 1732907128 | | 4,600/- Rs |
| 17. | Yamaha KA-05 Y 2725 | IL 3046382 | 96KIL3046382 | | 10,200/- Rs |
| 18. | Suzuki KL-07 W 2820 | 01903M32331B | 3F275105 | | 3,900/- Rs |
| 19. | Suzuki KA-29 V 4258 | KM 02M270571 | 902F222461 | | 4,600/- Rs |
| 20. | Bajaja pulsur KA-51 H 3804 | DHGBBP 81436 | MD2DHDJZZNDM88177 | | 9,800/- Rs |

| Sl.No | Type Vehicle | Vehicle No, | Chasis No, | Eng, No, | Value |
|---|---|---|---|---|---|
| 21. | Bajaj platina<br>KA-51 K 1482 | DUMBNE96903 | MD2DD5HNWE11991 | | 4,900/- Rs |
| 22. | Suzuki<br>CNO 4733 | 8512M626839 | 360YF000862 | | 3,800/- Rs |
| 23. | Bajaja pulsur<br>KA-02 FL 2346 | DHGBBP61613 | MD2DHDHZZPCB23643 | | 5,900/- Rs |
| 24. | TVS XL<br>No-Nil | 0D1E71050887 | MD621BH1172E56443 | | 6,200/- Rs |
| 25. | Yamaha RX<br>KA-06 – 8649 | 4TL511953 | 01HYTL511953 | | 14,500/- Rs |
| 26. | TVS Victor<br>KA-12 –E J -57 | N3305M538932 | N330AF501034 | | 6,200/- Rs |
| 27. | TVS SCOTY<br>KA-03 –E D -2538 | KA1 GM594681 | ---- | | 2,600/- Rs |
| 28. | YAMAHA<br>KA-05-L-1669 | ILI- 406586 | ILI- 406586 | | 3,800/- Rs |
| 29. | HERO HONDA SPLENDoR<br>KA-51 –E -4127 | 05 JLSE 26440 | SJ 16F 26052 | | 8,500/- Rs |
| 30. | HONDA<br>DUYo<br>KA-04-EL-2820 | JE11E OO49417 | ME4JF 11SE480 | | 8,200/- Rs |
| 31. | TVS XL<br>KA51-H-6787 | 0DD 61674059 | MD621BOO1762D31039 | | 3,600/- Rs |
| 32. | TVS XL<br>KA05-EE-2976 | 01011F358469 | P1011354001 | | 2,800/- Rs |
| 33. | HERO HONDA SPLENDER plus<br>TN-70-AC-1799 | 06K15M 19104 | 06K16C39893 | | 10,800/- Rs |

**PR.2213** **CHIEF JUDICIAL MAGISTRATE**

**SC.10** **BANGALORE RURAL DISTRICT, BANGALORE.**

**ಕಾರ್ಮಿಕ ಅಧಿಕಾರಿ ಮತ್ತು ನೌಕರರ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ–2, ಬಳ್ಳಾರಿ**

**ಸಂಖ್ಯೆ:ಕಾಅಬ–2/ಕಾನಪ/ಸಿಆರ್–141/2013[ಎಫ್] ದಿನಾಂಕ:02–08–2013**.

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1] ಶ್ರೀಮತಿ ಮೆಹತಾಬ್ ಗಂಡ ಲೇಟ್ ಚಾಂದ್‌ಬಾಷ,<br>30 ವರ್ಷ [ಮೃತನ ಮೊದಲನೇ ಹೆಂಡತಿ]<br>2] ಶ್ರೀಮತಿ ಕಮಾರ್ ಗಂಡ ಲೇಟ್ ಚಾಂದ್‌ಬಾಷ,<br>25 ವರ್ಷ [ಮೃತನ ಎರಡನೇ ಹೆಂಡತಿ]<br>3] ರೋಷನ್ ಜಮೀರ್ ತಂದೆ ಲೇಟ್ ಚಾಂದ್‌ಬಾಷ, 13ವರ್ಷ [ಮೃತನ ಮಗ]<br>**ಇವರ ವಾಸ:** ಹುಸೇನ್ ನಗರ, ಬಳ್ಳಾರಿ. | | 1] ಗೊಗ್ಗಕಾರ್ತಿಕ್ ತಂದೆ ಜಿ. ಚನ್ನಬಸವರಾಜ್, ಟೆಂಪೋ ಟ್ರಾವಿಲರ್ ನಂ:ಕೆಎ–35/ಎ–5408ರ ಮಾಲೀಕರು, ಪಿ.ಬಿ.ನಂ:4, ಎನ್.ಸಿ. ಕಾಲೋನಿ, ಸುಹಕರಿ ಕಲ್ಯಾಣ ಮಂಟಪ, ಹೊಸಪೇಟೆ.<br>2] ಶ್ರೀ ಗುಲಾಬ್ ತಂದೆ ಮಸ್ತಾನ್ ಸಾಬ್, ಸೂಪರ್ ವೈಜರ್ ಆಫ್ ಟೆಂಪೋ ಟ್ರಾವಿಲರ್ ನಂ: ಕೆಎ–35/ಎ–5408, 17ನೇ ವಾರ್ಡ್, ನೂರಾನಿ ಮಸೀದಿ ಹತ್ತಿರ, ಹೊಸಪೇಟೆ.<br>3] ದಿ ಡಿವಿಜನಲ್ ಮ್ಯಾನೇಜರ್,<br>ಮೆ: ಯೂನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪ.ಲಿ., ಬಳ್ಳಾರಿ |

**ಪ್ರಕಟಣೆ**

ಈ ಮೇಲ್ಕಂಡ ಅರ್ಜಿದಾರರು ಮೃತ ಲೇಟ್ ಚಾಂದ್‌ಬಾಷ ರವರು, 1ನೇ ಪ್ರತಿವಾದಿಯವರ ಮಾಲೀಕತ್ವದ ಟೆಂಪೋ ಟ್ರಾವಿಲರ್ ನಂ:ಕೆಎ–35/ಎ–5408ನಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದು, ದಿನಾಂಕ:04–12–2012ರಂದು 1ನೇ ಪ್ರತಿವಾದಿಯವರ ಆದೇಶದ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾಗ ಅಪಘಾತ ಉಂಟಾಗಿ ಮೃತಪಟ್ಟಿರುತ್ತಾನೆಂದು, ಹಾಗೂ ತಾವು ಮೃತನ ವಾರಸುದಾರ ಮತ್ತು ಅವಲಂಬಿತರೆಂದು ಹೇಳಿ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿಯಲ್ಲಿ ಮೃತನ ಬಾಬ್ತು ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೋರಿದಲ್ಲಿ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಎಂ.ಕೃಷ್ಣಮೂರ್ತಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಉಪವಿಭಾಗ–2,ಬಳ್ಳಾರಿ.

**PR.2180**

## ಕಾರ್ಮಿಕ ಅಧಿಕಾರಿ ಮತ್ತು ನೌಕರರ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ–2, ಬಳ್ಳಾರಿ

**ಸಂಖ್ಯೆ:ಕಾಅಬ–2/ಕಾನಪ/ಸಿಆರ್–142/2013[ಎಫ್] ದಿನಾಂಕ:02–08–2013.**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1] ಶ್ರೀಮತಿ ತಾಯಕ್ಕ ಗಂಡ ಲೇಟ್ ಯನ್ನಪ್ಪ, 48 ವರ್ಷ [ಮೃತನ ಹೆಂಡತಿ]<br>2] ಮೈನರ್ ಮಾರೇಶ್ ತಂದೆ ಲೇಟ್ ಯನ್ನಪ್ಪ, 17 ವರ್ಷ, [ಮೃತನ ಮಗ]<br>**ಇವರ ವಾಸ:** ದೇವಿನಗರ, ಬಳ್ಳಾರಿ | | 1] ಶ್ರೀ ಹೊನ್ನೂರಪ್ಪ ತಂದೆ ಇಡ್ಲಿ ವಂದ್ರಪ್ಪ, ಟಾಟಾ ಎ.ಸಿ ನಂ:ಕೆಎ–16/ಎ–9876ರ ಮಾಲೀಕರು, ಪೆನ್ನಮ್ಮನಹಳ್ಳಿ ಗ್ರಾಮ, ತಿಮ್ಮಲಾಪುರ ಪೋಸ್ಟ್, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.<br>2] ದಿ ಮ್ಯಾನೇಜರ್,<br>ಮೆ: ಶ್ರೀರಾಮ್ ಜನರಲ್ ಇನ್ಸೂರೆನ್ಸ್ ಕಂ..ಲಿ., ಜೈಪುರ. |

**ಪ್ರಕಟಣೆ**

ಈ ಮೇಲ್ಕಂಡ ಅರ್ಜಿದಾರರು ಮೃತ ಯನ್ನಪ್ಪ ರವರು, 1ನೇ ಪ್ರತಿವಾದಿಯವರ ಮಾಲೀಕತ್ವದ ಟಾಟಾ ಎ.ಸಿ ನಂ:ಕೆಎ–16/ಎ–9876ರಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದು, ದಿನಾಂಕ:22–05–2013ರಂದು 1ನೇ ಪ್ರತಿವಾದಿಯವರ ಆದೇಶದ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾಗ ಅಪಘಾತ ಉಂಟಾಗಿ ಮೃತಪಟ್ಟಿರುತ್ತಾನೆಂದು, ಹಾಗೂ ತಾವು ಮೃತನ ವಾರಸುದಾರ ಮತ್ತು ಅವಲಂಬಿತರೆಂದು ಹೇಳಿ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿಯಲ್ಲಿ ಮೃತನ ಬಾಬ್ತು ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೋರಿದಲ್ಲಿ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಎಂ.ಕೃಷ್ಣಮೂರ್ತಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಉಪವಿಭಾಗ–2,ಬಳ್ಳಾರಿ.

**PR.2182**

## ಕಾರ್ಮಿಕ ಅಧಿಕಾರಿ ಮತ್ತು ನೌಕರರ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ–2, ಬಳ್ಳಾರಿ

**ಸಂಖ್ಯೆ:ಕಾಅಬ–2/ಕಾನಪ/ಸಿಆರ್–144/2013[ಎಫ್] ದಿನಾಂಕ:17–08–2013.**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1] ಶ್ರೀಮತಿ ನೂಕ ರತ್ನಂ ಗಂಡ ಲೇಟ್ ರಾಜು, 24 ವರ್ಷ [ಮೃತನ ಹೆಂಡತಿ]<br>2] ಮೈನರ್ ದುರ್ಗಾ ಪ್ರಸಾದ್ ತಂದೆ ಲೇಟ್ ರಾಜು, 05 ವರ್ಷ [ಮೃತನ ಮಗ]<br>3] ಮೈನರ್ ಲೋಕೇಶ್ ತಂದೆ ಲೇಟ್ ರಾಜು, 03ವರ್ಷ [ಮೃತನ ಮಗ]<br>4] ಶ್ರೀಮತಿ ರಂಗೋಲಾ ಲಕ್ಷ್ಮೀ ಗಂಡ ರಂಗೋಲಾ ಸನ್ಯಾಸಿ ರಾವ್, 45 ವರ್ಷ.<br>**ಇವರ ವಾಸ:** ಹವಂಬಾವಿ, ಬಳ್ಳಾರಿ. | | 11] ಮೆ: ಕೆ.ಪಿ.ಆರ್. ಅಗ್ರೋ, ಲಡಕನ್ ಬಾವಿ ರಸ್ತೆ, ವರದಪುರ ಗ್ರಾಮ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಟ್ರಾಕ್ಟರ್ ನಂ: ಕೆಎ–35/ಟಿ–8952ರ ಮಾಲೀಕರು.<br>2] ದಿ ಡಿವಿಜನಲ್ ಮ್ಯಾನೇಜರ್,<br>ಮೆ: ದಿ ಓರಿಯಂಟಲ್ ಇನ್ಸೂರೆನ್ಸ್ ಕಂಪ.ಲಿ., ಬಳ್ಳಾರಿ. |

**ಪ್ರಕಟಣೆ**

ಈ ಮೇಲ್ಕಂಡ ಅರ್ಜಿದಾರರು ಮೃತ ಲೇಟ್ ರಾಜು ರವರು, 1ನೇ ಪ್ರತಿವಾದಿಯವರ ಮಾಲೀಕತ್ವದ ಟ್ರಾಕ್ಟರ್ ನಂ: ಕೆಎ–35/ಟಿ–8952ರಲ್ಲಿ ಲೇಬರ್‌ನಾಗಿ ಕೆಲಸ ನಿರ್ವಹಿಸುತ್ತಿದ್ದು, ದಿನಾಂಕ:14–05–2013ರಂದು 1ನೇ ಪ್ರತಿವಾದಿಯವರ ಆದೇಶದ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾಗ ಅಪಘಾತ ಉಂಟಾಗಿ ಮೃತಪಟ್ಟಿರುತ್ತಾನೆಂದು, ಹಾಗೂ ತಾವು ಮೃತನ ವಾರಸುದಾರ ಮತ್ತು ಅವಲಂಬಿತರೆಂದು ಹೇಳಿ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿಯಲ್ಲಿ ಮೃತನ ಬಾಬ್ತು ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೋರಿದಲ್ಲಿ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಎಂ.ಕೃಷ್ಣಮೂರ್ತಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಉಪವಿಭಾಗ–2,ಬಳ್ಳಾರಿ.

**PR.2163**

**ಕಾರ್ಮಿಕ ಅಧಿಕಾರಿ ಮತ್ತು ನೌಕರರ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ–2, ಬಳ್ಳಾರಿ**

**ಸಂಖ್ಯೆ:ಕಾಅಬ–2/ಕಾನಪ/ಸಿಆರ್–136/2013[ಎಫ್] ದಿನಾಂಕ:19–07–2013.**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 11] ಶ್ರೀ ಕೆ. ಮಹಾಂತಪ್ಪ ತಂದೆ ಕೆ. ದುರುಗಪ್ಪ, 53 ವರ್ಷ<br>2] ಶ್ರೀ ಕೆ. ಯಮುನೂರಪ್ಪ ತಂದೆ ಕೆ. ಮಹಾಂತಪ್ಪ 22 ವರ್ಷ [ಮೃತನ ಮಗ]<br>3]ಶ್ರೀ ಕೆ. ಇಂದ್ರೇಶ್ ತಂದೆ ಕೆ. ಮಹಾಂತಪ್ಪ 20 ವರ್ಷ [ಮೃತನ ಮಗ]<br>4]ಕೆ. ರಾಧ ತಂದೆ ಕೆ. ಮಹಾಂತಪ್ಪ 19 ವರ್ಷ [ಮೃತನ ಮಗಳು]<br>5] ಕೆ. ಕಾವೇರಿ ತಂದೆ ಕೆ. ಮಹಾಂತಪ್ಪ 18 ವರ್ಷ, [ಮೃತನ ಮಗಳು]<br>**ಇವರ ವಾಸ:** 18ನೇ ವಾರ್ಡ್, ರಾಮ ಟಾಕೀಸ್ ಹತ್ತಿರ, ಕೊರವರ ಓಣಿ, ಎಸ್.ಆರ್. ನಗರ, ಹೊಸಪೇಟೆ, ಬಳ್ಳಾರಿ ಜಿಲ್ಲೆ. | | 1] ಶ್ರೀ ಜಿ. ರೇಣುಕಾ ರಾಜ್ ತಂದೆ ಜಿ. ದೇವಪ್ಪ,<br>2] ಶ್ರೀ ಜಿ. ಶಿವಕುಮಾರ ತಂದೆ ಜಿ. ದೇವಪ್ಪ,<br>ಇಬ್ಬರ ವಿಳಾಸ: ಅಪೋಲಾಬೈಕ್ಸ್ ಕೇರ್, ಹೊಸಪೇಟೆ, ಪ್ರಾಜ್ವ ಪ್ಲಾಜ್, ಕಾಲೇಜು ರೋಡ್, ಹೊಸಪೇಟೆ |

**ಪ್ರಕಟಣೆ**

ಈ ಮೇಲ್ಕಂಡ ಅರ್ಜಿದಾರರು ಮೃತ ಕೆ. ಮಹಾಂತಪ್ಪ ರವರು, 1ನೇ ಪ್ರತಿವಾದಿಯವರ ಮಾಲೀಕತ್ವದ ಅಪೋಲಾಬೈಕ್ಸ್ ಕೇರ್ ನಲ್ಲಿ ಅಸಿಸ್ಟೆಂಟ್ ಮೆಕಾನಿಕ್ ಆಗಿ ಕೆಲಸ ನಿರ್ವಹಿಸುತ್ತಿದ್ದು, ದಿನಾಂಕ:17–04–2013ರಂದು 1ನೇ ಪ್ರತಿವಾದಿಯವರ ಆದೇಶದ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾಗ ಅಪಘಾತ ಉಂಟಾಗಿ ಮೃತಪಟ್ಟಿರುತ್ತಾನೆಂದು, ಹಾಗೂ ತಾವು ಮೃತನ ವಾರಸುದಾರ ಮತ್ತು ಅವಲಂಬಿತರೆಂದು ಹೇಳಿ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿಯಲ್ಲಿ ಮೃತನ ಬಾಬ್ತು ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೋರಿದಲ್ಲಿ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಎಂ.ಕೃಷ್ಣಮೂರ್ತಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಉಪವಿಭಾಗ–2,ಬಳ್ಳಾರಿ.

**PR.2186**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು